# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

**ಮೂರನೇ ಅಧಿವೇಶನ**

# ಪೂರಕ ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 14ನೇ ಫೆಬ್ರವರಿ, 2019

(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

**(ಐಟಂ 6 ರ ನಂತರ ಈ ಕೆಳಕಂಡ ವಿಷಯವನ್ನು ಸೇರಿಸಿಕೊಳ್ಳತಕ್ಕದ್ದು)**

## 1. ಅರ್ಜಿಗಳನ್ನೊಪ್ಪಿಸುವುದು

**ಶ್ರೀ ಎಂ. ಕೃಷ್ಣಾರೆಡ್ಡಿ,** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ಈ ಕೆಳಕಂಡ ಅರ್ಜಿಗಳನ್ನು ಒಪ್ಪಿಸುವುದು:

1) ಕೆ.ಐ.ಐ.ಡಿ.ಬಿ. ಸಂಸ್ಥೆಯು ಸ್ವಾಧೀನಪಡಿಸಿಕೊಂಡಿರುವ ಜಮೀನನ್ನು ಅಕ್ರಮವಾಗಿ ಮಾಲೀಕರಿಗೆ ಖಾತೆ ಮತ್ತು ಪಹಣಿಗಳನ್ನು ಮಾಡಿಕೊಡಲು ಸಹಕರಿಸಿದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ.

2) ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು, ತೊಂಡೆಬಾವಿ ಗ್ರಾಮದಲ್ಲಿ ಎಸಿಸಿ ಸಿಮೆಂಟ್ ಕಂಪನಿಯವರು ಕಾನೂನು ಉಲ್ಲಂಘಿಸಿ ನಡೆಸುತ್ತಿರುವ ಕಾರ್ಖಾನೆಯ ವಿರುದ್ಧ ಕ್ರಮವಹಿಸುವ ಬಗ್ಗೆ.

3) ಬೆಂಗಳೂರು ನಗರದ ಆನೇಕಲ್ ಯೋಜನಾ ಪ್ರಾಧಿಕಾರದಲ್ಲಿ 2016–17ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಲ್ಲಿನ ಆಕ್ಷೇಪಣಾ ಮತ್ತು ವಸೂಲಾತಿ ಮಾಡುವಲ್ಲಿ ಸರ್ಕಾರದ ಬೊಕ್ಕಸಕ್ಕೆ ಕೋಟ್ಯಾಂತರ ರೂಪಾಯಿ ಅಕ್ರಮ ಎಸಗಿರುವ ಬಗ್ಗೆ.

4) ದೊಡ್ಡಬಳ್ಳಾಪುರ ಕೈಗಾರಿಕೆ ಪ್ರದೇಶದಲ್ಲಿರುವ ಮೆಸರ್ಸ್ ಇಂಡಿ ಮಿಮ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಅಪಾಯಕರ ಮಟ್ಟದಲ್ಲಿ ಶಬ್ದ ಮಾಲಿನ್ಯ ಉಂಟುಮಾಡುತ್ತಿರುವ ಬಗ್ಗೆ.

**... 2/ ..**

5) ಬೆಂಗಳೂರು ನಗರದ ಕತ್ರಿಗುಪ್ಪೆ ಬನಶಂಕರಿ 3ನೇ ಹಂತದ ಭವಾನಿ ಲೇಔಟ್‌ನಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯವರು ನ್ಯಾಯಾಲಯದ ಶಾಶ್ವತ ತಡೆಯಾಜ್ಞೆ ಆದೇಶ ಮತ್ತು ಉಚ್ಚ ನ್ಯಾಯಾಲಯದ ಆದೇಶವನ್ನು ಧಿಕ್ಕರಿಸಿ ನ್ಯಾಯಾಂಗ ನಿಂದನೆ ಮಾಡಿ ಅಕ್ರಮವಾಗಿ ನಡೆಸುತ್ತಿರುವ ಕಾಮಗಾರಿಯನ್ನು ತಡೆಯುವ ಬಗ್ಗೆ.

6) ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಹೆರಂಗಡಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಹೈಗುಂದದಲ್ಲಿರುವ ಶ್ರೀ ದುರ್ಗಾಂಬಿಕ ದೇವಸ್ಥಾನದ ರಸ್ತೆಯನ್ನು ನಿರ್ಮಿಸಿಕೊಡುವ ಬಗ್ಗೆ.

7) ಬೆಂಗಳೂರು ಪೂರ್ವ ತಾಲ್ಲೂಕು, ಕುಂದಲಹಳ್ಳಿ ಸರ್ವೆ ನಂ. 118ರಲ್ಲಿನ ಟೆರ್ಲಿಂಗ್ ಗ್ರೂಪ್ ಲೈನ್ ಕಲ್ಯಾಣಿರವರು ಅಕ್ರಮವಾಗಿ ಕಟ್ಟಡ ಕಟ್ಟಿ ರಾಜ ಕಾಲುವೆ ಒತ್ತುವರಿ ಮಾಡಿರುವ ಬಗ್ಗೆ.

## 2. ಶಾಸನ ರಚನೆ

### I. ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು

**1.** **ಶ್ರೀ ಈ. ತುಕಾರಾಂ (ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು) ಅವರು:-**

ಅ) 2018ನೇ ಸಾಲಿನ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು**
***http://kla.kar.nic.in/assembly/lob/lob.htm***